# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 05 |
| ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 13.09.2021 |
| ಉತ್ತರಿಸುವ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್-19 ಸಮಯದಲ್ಲಿ ಮಕ್ಕಳು ಶಾಲೆಗೆ ಹೋಗದೆ ಮನೆಯಲ್ಲಿಯೇ ಆನ್ ಲೈನ್ ಕ್ಲಾಸ್ ಮುಖಾಂತರ ಕಲಿಕೆಯನ್ನು ಮುಂದುವರಿಸಿದ್ದು, ಇದರಿಂದ ಮಕ್ಕಳ ಮೇಲೆ ಉಂಟಾದ ಮಾನಸಿಕ ಸಮಸ್ಯೆಯ ಬಗ್ಗೆ ಸರ್ಕಾರ ಗಮನಿಸಿದೆಯೇ; | ಗಮನಿಸಲಾಗಿದೆ. |
| ಆ) | ಕೋವಿಡ್ ಸಂದರ್ಭದಲ್ಲಿ ಮಕ್ಕಳು ಕೊರೋನಾ ಭಯ, ಮಾನಸಿಕ ಒತ್ತಡ, ಮೊಬೈಲ್ ಗೀಳಿಗೆ ಒಳಗಾಗಿದ್ದು, ಈ ಸಮಸ್ಯೆಯಿಂದ ಅವರನ್ನು ಹೊರತರಲು ಸರ್ಕಾರ ಯಾವುದಾದರೂ ಕ್ರಮ ಕೈಗೊಂಡಿದೆಯೇ; | • ಕೋವಿಡ್-19ರ ಸಾಂಕ್ರಾಮಿಕ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ಉಂಟಾದ ಮಾನಸಿಕ ಸಮಸ್ಯೆಯ ಕುರಿತು ಅವರಲ್ಲಿ ಆತ್ಮಸ್ಥೈರ್ಯ ತುಂಬಲು ಕೇಂದ್ರ ಶಿಕ್ಷಣ ಇಲಾಖೆಯು "ಮನೋದರ್ಪಣ" ಎಂಬ ಕಾರ್ಯತಂತ್ರವನ್ನು ಅಂತರ್‌ಜಾಲದಲ್ಲಿ ಅಳವಡಿಸಿದೆ. ಇದರಲ್ಲಿ ಟೋಲ್‌ಫ್ರೀ ಸಂಖ್ಯೆಯನ್ನು ವಿದ್ಯಾರ್ಥಿಗಳು ಮತ್ತು ಪೋಷಕರಿಗೆ ನೀಡಿ ಅವರ ಮಾನಸಿಕ ಸಮಸ್ಯೆಗೆ ತಜ್ಞರಿಂದ ಸ್ಪಂದಿಸುವ ನಿಟ್ಟಿನಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ.<br>• ದಿನಾಂಕ:10.06.2021ರ ಸುತ್ತೋಲೆಯಲ್ಲಿ ಶೈಕ್ಷಣಿಕ ಮಾರ್ಗಸೂಚಿಯನ್ನು ಹೊರಡಿಸಿದ್ದು, ದೂರದರ್ಶನ ಚಂದನ ವಾಹಿನಿಯಲ್ಲಿ ಪ್ರತಿ ದಿನ 1ರಿಂದ 10ನೇ ತರಗತಿಯ ವಿದ್ಯಾರ್ಥಿ-ವಿದ್ಯಾರ್ಥಿನಿಯರುಗಳಿಗೆ "ಸಂವೇದ" ಎಂಬ ದೂರದರ್ಶನ ಆಧಾರಿತ ಇ-ಕಲಿಕಾ ಕಾರ್ಯಕ್ರಮವನ್ನು ಆಯೋಜಿಸಲಾಗಿದೆ.<br>• ಪರ್ಯಾಯ ವಿಧಾನದಲ್ಲೂ ದೀಕ್ಷಾ ಆಪ್‌ನಲ್ಲಿ ಒಂದು ದೇಶ ಒಂದು ಪೋರ್ಟಲ್ 1ರಿಂದ 10ನೇ ತರಗತಿಯ ಸುಮಾರು 22000ಕ್ಕೂ ಹೆಚ್ಚು ಕಂಟೆಂಟ್‌ಗಳನ್ನು ಅಳವಡಿಸಲಾಗಿದೆ. ಮಕ್ಕಳ ಸಹಾಯವಾಣಿಯ ಯೂಟ್ಯೂಬ್‌ನಲ್ಲಿ ವೀಡಿಯೋ ಪಾಠಗಳನ್ನು ಅಪ್‌ಲೋಡ್ |

| | | |
|---|---|---|
| | | ಮಾಡಲಾಗಿದೆ. ಬೋಧನಾ ತರಗತಿಯ ವೀಡಿಯೋಗಳನ್ನು ಅಪ್ ಲೋಡ್ ಮಾಡಲಾಗಿದ್ದು, ವಿದ್ಯಾರ್ಥಿಗಳು ಇದರ ಸದುಪಯೋಗವನ್ನು ಪಡೆದುಕೊಳ್ಳುತ್ತಿದ್ದಾರೆ.<br>• ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಆರೋಗ್ಯ ಇಲಾಖೆಯ ಕೋವಿಡ್-19 ತಾಂತ್ರಿಕ ಸಲಹಾ ಸಮಿತಿಯೊಂದಿಗೆ ದಿನಾಂಕ:06.08.2021, 14.08.2021 ಮತ್ತು 30.08.2021ರಂದು ನಡೆದ ಸಭೆಗಳಲ್ಲಿ ಕೈಗೊಂಡ ನಿರ್ಣಯದಂತೆ ರಾಜ್ಯದಲ್ಲಿನ ಸರ್ಕಾರಿ, ಅನುದಾನಿತ ಮತ್ತು ಅನುದಾನ ರಹಿತ ಶಾಲೆಗಳಲ್ಲಿ ಮೊದಲ ಹಂತದಲ್ಲಿ ದಿನಾಂಕ:23.08.2021ರಿಂದ 9 ಮತ್ತು 10ನೇ ತರಗತಿಗಳನ್ನು ಹಾಗೂ ಎರಡನೇ ಹಂತದಲ್ಲಿ ದಿನಾಂಕ:06.09.2021ರಿಂದ 6ರಿಂದ 8ನೇ ತರಗತಿಗಳನ್ನು ವಿದ್ಯಾರ್ಥಿಗಳಿಗೆ ಭೌತಿಕವಾಗಿ ತೆರೆಯಲು ಕ್ರಮಕೈಗೊಳ್ಳಲಾಗಿದೆ. ಶಾಲೆಗಳನ್ನು ಭೌತಿಕವಾಗಿ ಪ್ರಾರಂಭಿಸಲು ಅನುಸರಿಸಬೇಕಾದ ಪ್ರಮಾಣಿತ ಕಾರ್ಯಾಚರಣೆ ವಿಧಾನ(Standard Operating Procedure) ಯನ್ನು ದಿನಾಂಕ:16.08.2021ರಂದು ಹೊರಡಿಸಲಾಗಿದ್ದು, ಸದರಿ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವಂತೆ ಎಲ್ಲಾ ಉಪನಿರ್ದೇಶಕರು(ಆಡಳಿತ), ಉಪನಿರ್ದೇಶಕರು(ಅಭಿವೃದ್ಧಿ) ಮತ್ತು ಕ್ಷೇತ್ರಶಿಕ್ಷಣಾಧಿಕಾರಿಗಳಿಗೆ ಜ್ಞಾಪನದ ಮೂಲಕ ತಿಳಿಸಲಾಗಿದೆ. |
| ಇ) | ಮಕ್ಕಳ ಈ ಸಮಸ್ಯೆಯನ್ನು ಬಗೆಹರಿಸುವ ನಿಟ್ಟಿನಲ್ಲಿ ಪ್ರತಿ ಶಾಲೆಗಳಿಗೆ ಒಬ್ಬ ಆಪ್ತ ಸಮಾಲೋಚಕರನ್ನು ನೇಮಿಸುವ ಕುರಿತು ಸರ್ಕಾರ ಕೈಗೊಂಡ ಕ್ರಮವೇನು? | ಆಪ್ತ ಸಮಾಲೋಚಕರನ್ನು ನೇಮಿಸುವ ಕುರಿತು ಪ್ರಸ್ತಾವನೆಯು ಸದ್ಯಕ್ಕೆ ಇಲಾಖೆಯ ಮುಂದೆ ಇರುವುದಿಲ್ಲ. |

ಇಪಿ 138 ಎಂ.ಹೆಚ್.ಟಿ 2021

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು